# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1012 |
| ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ ರಾಥೋಡ್ |
| ಉತ್ತರಿಸುವ ದಿನಾಂಕ | 22-12-2021 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮುಜರಾಯಿ ಇಲಾಖೆ ವ್ಯಾಪ್ತಿಯಲ್ಲಿ ಬರುವ ಎಬಿಸಿ ಶ್ರೇಣಿಯ ದೇವಸ್ಥಾನಗಳಾವುವು; ಇವುಗಳಲ್ಲಿ ಶಿಥಿಲಗೊಂಡಿರುವ ದೇವಸ್ಥಾನಗಳೆಷ್ಟು; | ರಾಜ್ಯದಲ್ಲಿನ ಮುಜರಾಯಿ ಇಲಾಖಾ ವ್ಯಾಪ್ತಿಗೆ ಒಳಪಡುವ ಅಧಿಸೂಚಿತ ಸಂಸ್ಥೆಗಳ ಸಂಖ್ಯೆ ಒಟ್ಟು 34,563. ಈ ಅಧಿಸೂಚಿತ ಸಂಸ್ಥೆಗಳ ಪ್ರವರ್ಗವಾರು ವಿವರ ಈ ಕೆಳಕಂಡಂತಿರುತ್ತದೆ.<br><br>ಕ್ರ ಸಂ: 1 / 2 / 3 / ಒಟ್ಟು<br>ಪ್ರವರ್ಗ: "ಎ" / "ಬಿ" / "ಸಿ"<br>ಸಂಸ್ಥೆ: 205 / 139 / 34,219 / 34,563<br><br>ಇವುಗಳಲ್ಲಿ ವಿವಿಧ ಜಿಲ್ಲೆಯ 106 ದೇವಾಲಯಗಳು ಶಿಥಿಲಗೊಂಡಿರುತ್ತವೆ. |
| ಆ) | ಅವುಗಳ ಜೀರ್ಣೋದ್ಧಾರಕ್ಕಾಗಿ ಇಲಾಖೆ ಕೈಗೊಂಡಿರುವ ಕ್ರಮಗಳೇನು? | ನಿರಂತರವಾಗಿ ಸುರಿದ ಮಳೆಯಿಂದಾಗಿ ಹಾನಿಗೊಳಗಾದ ದೇವಾಲಯಗಳ ಜೀರ್ಣೋದ್ಧಾರ ಮಾಡಲು ಅನುಮತಿ ಪಡೆಯಲು ಕೋರಿ ಎಲ್ಲಾ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿರುತ್ತದೆ ಮತ್ತು ಸರ್ಕಾರದ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಜಿಲ್ಲಾಧಿಕಾರಿಗಳ ಹಂತದಲ್ಲಿ ಹಾನಿಗೊಳಗಾದ ದೇವಾಲಯಗಳನ್ನು ನಿಯಮಾನುಸಾರ ದುರಸ್ಥಿಗೊಳಿಸಲು ಕ್ರಮ ಕೈಗೊಳ್ಳುವಂತೆ ಸಹ ತಿಳಿಸಿದೆ.<br><br>ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ವ್ಯಾಪ್ತಿಗೊಳಪಡುವ ದೇವಾಲಯಗಳನ್ನು ನಿಯಮ 40(ಎ)ರನ್ವಯ ದೇವಾಲಯಗಳಲ್ಲಿ ಮೂಲಭೂತ ಸೌಕರ್ಯ/ ವಸತಿ ಸೌಕರ್ಯ/ ಶಿಥಿಲಾವಸ್ಥೆಯಲ್ಲಿರುವ ಕಟ್ಟಡಗಳ ದುರಸ್ಥಿ/ನವ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸುತ್ತೋಲೆ ಸಂಖ್ಯೆ:ಸಿಎನ್ಆರ್ 1/ಸಿಆರ್ 142/2014-15 ದಿನಾಂಕ: 13.01.2015ರಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ನಿರ್ದೇಶನ ನೀಡಲಾಗಿರುತ್ತದೆ. |

ಸಂಖ್ಯೆ: ಕಂಇ 267 ಮುಸಪ್ರ 2021

(ಶಶಿಕಲಾ. ಅ. ಜೊಲ್ಲೆ)

ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು